# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 241
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 14-12-2021
ಉತ್ತರಿಸುವ ಸಚಿವರು : ಮಾನ್ಯ ಸಹಕಾರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆಯಲ್ಲಿ ಬಹಳ ದೀರ್ಘಕಾಲದಿಂದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡದಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಸದರಿ ತಿದ್ದುಪಡಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ನಿಗದಿಪಡಿಸಿರುವ ಕಾಲಮಿತಿ ಎಷ್ಟು; | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ:ಡಿಪಿಎಆರ್ 97 ಎಸ್ಆರ್‌ಡಿ 2004, ದಿನಾಂಕ: 08-10-2004 ರನ್ವಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು 03 ವರ್ಷಕ್ಕೊಮ್ಮೆ ಪರಿಷ್ಕರಿಸಬೇಕಾಗಿರುತ್ತದೆ. |
| ಇ) | ಸದರಿ ಪ್ರಕ್ರಿಯೆ ಯಾವ ಹಂತದಲ್ಲಿದೆ; ಯಾವ ಕಾಲಮಿತಿಯಲ್ಲಿ ತಿದ್ದುಪಡಿ ತರಲಾಗುವುದು; | ಸಹಕಾರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ತಿದ್ದುಪಡಿ ಕುರಿತ ಕರಡು ನಿಯಮಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:14-10-2020 ರಂದು ವೃಂದ ಮತ್ತು ನೇಮಕಾತಿ ಪರಿಶೀಲನಾ ಉಪಸಮಿತಿ ಸಭೆಯಲ್ಲಿ ಚರ್ಚಿಸಿ ಸಿದ್ಧಪಡಿಸಲಾಗಿರುತ್ತದೆ.<br><br>ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯಿಂದ ಕರಡು ವೃಂದ ಮತ್ತು ನೇಮಕಾತಿ ನಿಯಮಗಳು ದಿನಾಂಕ:13-01-2021 ರಂದು ಪರಿಶೋಧಿಸಲ್ಪಟ್ಟಿರುತ್ತದೆ.<br><br>ನಂತರ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಮತ್ತು ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿ, ಕೆಲವೊಂದು ಮಾರ್ಪಾಡುಗಳನ್ನು ಮಾಡಿದ್ದು, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:04-10-2021 ರಂದು ನಡೆದ ವೃಂದ ಮತ್ತು ನೇಮಕಾತಿ ಪರಿಶೀಲನಾ ಸಮಿತಿ ಸಭೆ ಜರುಗಿದ್ದು, ಸದರಿ ಸಭೆಯಲ್ಲಿನ ಸೂಚನೆಯಂತೆ ಅಗತ್ಯ ಕ್ರಮ ಕೈಗೊಂಡು ಪ್ರಸ್ತಾಪಿಸಿರುವ ಕರಡು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೂಕ್ತ ಮಾರ್ಪಾಡು/ತಿದ್ದುಪಡಿಯನ್ನು ಅಳವಡಿಸಿಕೊಂಡು ಪರಿಷ್ಕೃತ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ನಿಬಂಧಕರಿಂದ ಪಡೆದು ವೃಂದ ಪರಿಶೀಲನಾ ಸಮಿತಿಯ ಮುಂದೆ ಮಂಡಿಸಲಾಗುವುದು.<br><br>ವೃಂದ ಪರಿಶೀಲಿನಾ ಸಮಿತಿಯ ಅನುಮೋದನೆಯ ನಂತರ ಸಚಿವ ಸಂಪುಟದ ಅನುಮೋದನೆಯನ್ನು ಪಡೆದು ಕರಡು ನಿಯಮಗಳನ್ನು ಪ್ರಕಟಿಸಲಾಗುವುದು. ನಿಗದಿತ ಕಾಲಾವಧಿಯಲ್ಲಿ ಸ್ವೀಕೃತವಾಗುವ ಆಕ್ಷೇಪಣೆ/ ಸಲಹೆಗಳನ್ನು ಪರಿಶೀಲಿಸಿದ ನಂತರ ಅಂತಿಮ ನಿಯಮಗಳನ್ನು ಹೊರಡಿಸಲು ಕ್ರಮವಹಿಸಲಾಗುತ್ತದೆ. |

| | | |
|---|---|---|
| ಈ) | ಜೇಷ್ಠತೆಯಲ್ಲಿ ಹಿರಿಯರಾದ ಸಿ.ಡಿ.ಒ ಗಳಿಗೆ ಕೆ.ಎ.ಟಿ ನ್ಯಾಯಾಲಯದ ಆದೇಶದಂತೆ ಪದೋನ್ನತಿ ನೀಡುವ ಬದಲು ನಿಬಂಧಕರ ಕಛೇರಿಯಲ್ಲಿ ಜೇಷ್ಠತೆಯಲ್ಲಿ ಕಿರಿಯರಾದ ಸಿ.ಡಿ.ಒ ಗಳಿಗೆ ಎಆರ್‌ಸಿಎಸ್ ವೃಂದಕ್ಕೆ ಪದೋನ್ನತಿ ನೀಡಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ.<br><br>ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪಾಲಿಸಿ ಪದೋನ್ನತಿ ನೀಡಲಾಗುತ್ತಿದೆ. ಆಡಳಿತಾತ್ಮಕ ಹಿತದೃಷ್ಟಿಯಿಂದ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ 18 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುವ ಜೇಷ್ಠತೆಯಲ್ಲಿ ಹಿರಿಯವರಾದ ಸಹಕಾರ ಅಭಿವೃದ್ಧಿ ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ, ನಿಯಮ-32 ರಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿ ಇರಿಸಲಾಗಿದೆ.<br><br>ಇದು ಸ್ಥಾನಪನ್ನ ಮುಂಬಡ್ತಿಯಾಗಿರುವುದಿಲ್ಲ ಬದಲಿಗೆ ತಾತ್ಕಾಲಿಕ ವ್ಯವಸ್ಥೆಯಾಗಿರುತ್ತದೆ.<br><br>ಮಾನ್ಯ ಕರ್ನಾಟಕ ರಾಜ್ಯ ಆಡಳಿತ ನ್ಯಾಯಾಮಂಡಳಿಯ ಆದೇಶದಂತೆ, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸಹಕಾರ ಅಭಿವೃದ್ಧಿ ಅಧಿಕಾರಿಗಳ ಮನವಿಯಂತೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದಕ್ಕೆ ಪದೋನ್ನತಿ ನೀಡುವ ಸಂಬಂಧ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ/ಮಾರ್ಪಾಡು ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗುತ್ತಿದೆ. |
| ಉ) | ಹಾಗಿದ್ದಲ್ಲಿ, ಈ ಸಂಬಂಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | |

ಸಂಖ್ಯೆ: ಸಿಒ 257 ಇಸಿಎ 2021

**(ಎಸ್.ಟಿ.ಸೋಮಶೇಖರ್)**
ಸಹಕಾರ ಸಚಿವರು